





**(ಅವತೀರ್ಣ - ಮದೀನಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಸಂದೇಶವಾಹಕರೇ, ಕಪಟವಿಶ್ವಾಸಿಗಳು ನಿಮ್ಮ ಬಳಿಗೆ ಬಂದಾಗ, "ತಾವು ಖಂಡಿತ ಅಲ್ಲಾಹನ ಸಂದೇಶವಾಹಕರೆಂದು ನಾವು ಸಾಕ್ಷ್ಯ ವಹಿಸುತ್ತೇವೆ" ಎಂದು ಹೇಳುತ್ತಾರೆ. ನೀವು ಖಂಡಿತ ವಾಗಿಯೂ ಅಲ್ಲಾಹನ ಸಂದೇಶವಾಹಕರೆಂದು ಅಲ್ಲಾಹನಿಗೆ ತಿಳಿ ದಿದೆ. ಆದರೆ ಈ ಕಪಟವಿಶ್ವಾಸಿಗಳು ಮಹಾ ಸುಳ್ಳುಗಾರರೆಂದು ಅಲ್ಲಾಹನು ಸಾಕ್ಷ್ಯ ವಹಿಸುತ್ತಾನೆ.[1]

اِذَا جَآءَكَ الۡمُنٰفِقُوۡنَ قَالُوۡا نَشۡهَدُ اِنَّكَ لَرَسُوۡلُ اللّٰهِ ۘ وَاللّٰهُ يَعۡلَمُ اِنَّكَ لَرَسُوۡلُهٗ ؕ وَاللّٰهُ يَشۡهَدُ اِنَّ الۡمُنٰفِقِيۡنَ لَـكٰذِبُوۡنَ ۚ ①

2. ಇವರು ತಮ್ಮ ಪ್ರತಿಜ್ಞೆಗಳನ್ನು ಗುರಾಣಿಗಳಾಗಿ ಮಾಡಿಕೊಂಡಿದ್ದಾರೆ. ಈ ರೀತಿಯಲ್ಲಿ ಇವರು ಸ್ವತಃ ಅಲ್ಲಾಹನ ಮಾರ್ಗದಿಂದ ತಡೆದು ನಿಲ್ಲುತ್ತಾರೆ ಮತ್ತು ಇತರರನ್ನೂ ತಡೆಯುತ್ತಾರೆ. ಇವರು ಮಾಡುತ್ತಿರುವ ಕೃತ್ಯಗಳು ಎಷ್ಟು ಕೆಟ್ಟವು!

اِتَّخَذُوۡۤا اَيۡمَانَهُمۡ جُنَّةً فَصَدُّوۡا عَنۡ سَبِيۡلِ اللّٰهِ ؕ اِنَّهُمۡ سَآءَ مَا كَانُوۡا يَعۡمَلُوۡنَ ②

3. ಇವರು ಸತ್ಯದ ಮೇಲೆ ವಿಶ್ವಾಸವಿರಿಸಿ ಆ ಬಳಿಕ ನಿರಾಕರಿಸಿದ್ದರಿಂದ ಹೀಗೆಲ್ಲ ಆಯಿತು. ಆದುದರಿಂದ ಇವರ ಹೃದಯಗಳಿಗೆ ಮುದ್ರೆ ಹಾಕಿ ಬಿಡಲಾಯಿತು. ಇನ್ನು ಇವರು ಏನನ್ನೂ ಗ್ರಹಿಸುವುದಿಲ್ಲ.[2]

ذٰلِكَ بِاَنَّهُمۡ اٰمَنُوۡا ثُمَّ كَفَرُوۡا فَطُبِعَ عَلٰى قُلُوۡبِهِمۡ فَهُمۡ لَا يَفۡقَهُوۡنَ ③

---

1. ಅರ್ಥಾತ್- ಅವರು ತಮ್ಮ ಬಾಯಿಯಿಂದ ಹೊರಡಿಸುತ್ತಿರುವ ಮಾತು ಸ್ವಯಂ ಸತ್ಯವಾಗಿದೆ. ಆದರೆ ಯಾವ ಮಾತನ್ನು ಅವರು ಬಾಯಿಯಿಂದ ಹೊರಡಿಸುತ್ತಿದ್ದಾರೋ ಅಂತಹ ವಿಶ್ವಾಸವನ್ನು ಅವರು ಹೊಂದಿಲ್ಲ. ಆದ್ದರಿಂದ ತಮ್ಮ ಪ್ರವಾದಿತ್ವದ ಸಾಕ್ಷ್ಯ ವಹಿಸುತ್ತೇವೆ ಎಂಬ ಅವರ ಮಾತು ಸುಳ್ಳಾಗಿದೆ.
2. ಈ ಸೂಕ್ತದಲ್ಲಿ ಸತ್ಯವಿಶ್ವಾಸ ಸ್ವೀಕರಿಸುವುದು ಎಂದರೆ ಸತ್ಯವಿಶ್ವಾಸದ ಬಗ್ಗೆ ಘೋಷಣೆ ಮಾಡಿ ಮುಸ್ಲಿಮರಲ್ಲಿ ಶಾಮಿಲಾಗುವುದಾಗಿದೆ. ಸತ್ಯನಿಷೇಧ ಕೈಗೊಳ್ಳುವುದೆಂದರೆ ಹೃತ್ಪೂರ್ವಕವಾಗಿ ವಿಶ್ವಾಸ ಸ್ವೀಕರಿಸದೆ, ಸತ್ಯವಿಶ್ವಾಸದ ಬಾಹ್ಯ ಘೋಷಣೆಗೆ ಮೊದಲಿದ್ದ ಸತ್ಯನಿಷೇಧದ ಸ್ಥಿತಿಯಲ್ಲೇ ನೆಲೆಗೊಂಡಿರುವುದಾಗಿದೆ. ಅಲ್ಲಾಹನ ವತಿಯಿಂದ ಹೃದಯಕ್ಕೆ ಮುದ್ರೆಯೊತ್ತಲ್ಪಡುವುದೆಂದರೆ ಏನೆಂದು ಸ್ಪಷ್ಟವಾಗಿ ವಿವರಿಸಲಾದಂತಹ ಸೂಕ್ತಗಳಲ್ಲಿ ಇದೂ ಒಂದಾಗಿದೆ. ಕಪಟವಿಶ್ವಾಸಿಗಳ ಈ ಸ್ಥಿತಿಗೆ ಕಾರಣ ಅಲ್ಲಾಹನು ಅವರ ಹೃದಯಕ್ಕೆ ಮುದ್ರೆಯೊತ್ತಿದ್ದನಾದ್ದರಿಂದ ಸತ್ಯವಿಶ್ವಾಸ ಅವರಿಗೆ ಅಂತರ್‌ಗತವಾಗಲಿಲ್ಲ ಮತ್ತು ಅನಿವಾರ್ಯವಾಗಿ ಅವರು ಕಪಟವಿಶ್ವಾಸಿಗಳಾಗಿಯೇ ಉಳಿದು ಬಿಡಬೇಕಾಯಿತು ಎಂಬುದಲ್ಲ. ಬದಲಾಗಿ ಅವರು ವಿಶ್ವಾಸದ ಘೋಷಣೆ ಮಾಡಿದ ನಂತರವೂ ಸತ್ಯನಿಷೇಧದಲ್ಲೇ ನೆಲೆಗೊಳ್ಳುವ ತೀರ್ಮಾನ ಮಾಡಿದಾಗ ಅಲ್ಲಾಹನು ಅವರ ಹೃದಯಗಳಿಗೆ ಮುದ್ರೆಯೊತ್ತಿದನು. ಅನಂತರ ಅವರಿಂದ ಪ್ರಾಮಾಣಿಕವಾದ ಸತ್ಯವಿಶ್ವಾಸದ ಸೌಭಾಗ್ಯವನ್ನು ಕಸಿದುಕೊಳ್ಳಲಾಯಿತು ಮತ್ತು ಅವರು ಸ್ವತಃ ಅನುಸರಿಸಿದ್ದ ಕಪಟವಿಶ್ವಾಸದ 'ಭಾಗ್ಯ'ವನ್ನೇ ಅವರಿಗೆ ದಯಪಾಲಿಸಲಾಯಿತು.

4. ಇವರನ್ನು ನೋಡಿದರೆ ನಿಮಗೆ ಇವರ ಶರೀರವು ಬಹಳ ವೈಭವ ಪೂರ್ಣವಾಗಿ ಕಾಣಿಸುವುದು. ಇವರು ಮಾತನಾಡಿದರೆ ನೀವು ಇವರ ಮಾತನ್ನು ಕೇಳುತ್ತಲೇ ಇದ್ದು ಬಿಡುವಿರಿ. ಆದರೆ ವಾಸ್ತವ ದಲ್ಲಿ ಇವರು ಗೋಡೆಗೆ ಒರಗಿಸಿಡಲ್ಪಟ್ಟಿರುವ ಮರದ ಕೊರಡು ಗಳಂತಿದ್ದಾರೆ.[3] ಇವರು ಪ್ರತಿಯೊಂದು ಉಚ್ಚ ಸ್ವರವನ್ನು ತಮ್ಮ ವಿರುದ್ಧವೆಂದು ಭಾವಿಸುತ್ತಾರೆ. ಇವರು ಅಪ್ಪಟ ಶತ್ರುಗಳು. ಇವರ ಬಗ್ಗೆ ಎಚ್ಚರವಾಗಿರಿ. ಇವರ ಮೇಲೆ ಅಲ್ಲಾಹನ ಶಾಪವಿದೆ. ಇವರು ಎಲ್ಲಿ ಅಲೆದಾಡಿಸಲ್ಪಡುತ್ತಿದ್ದಾರೆ?[4]

وَإِذَا رَأَيْتَهُمْ تُعْجِبُكَ أَجْسَامُهُمْ ۖ
وَإِن يَقُولُوا تَسْمَعْ لِقَوْلِهِمْ ۖ كَأَنَّهُمْ
خُشُبٌ مُّسَنَّدَةٌ ۖ يَحْسَبُونَ كُلَّ
صَيْحَةٍ عَلَيْهِمْ ۚ هُمُ الْعَدُوُّ فَاحْذَرْهُمْ ۚ
قَاتَلَهُمُ اللَّهُ ۖ أَنَّىٰ يُؤْفَكُونَ ④

5. ಅಲ್ಲಾಹನ ಸಂದೇಶವಾಹಕರು ನಿಮಗಾಗಿ ಕ್ಷಮಾಯಾಚನೆ ಮಾಡುವಂತಾಗಲು, ನೀವು ಬನ್ನಿರಿ ಎಂದು ಅವರೊಡನೆ ಹೇಳ ಲಾದಾಗ ಅವರು ತಲೆ ಕೊಡವಿಕೊಳ್ಳುತ್ತಾರೆ ಮತ್ತು ಅವರು ಬಹಳ ಅಹಂಕಾರದಿಂದ ಬಾರದಿರುವುದನ್ನು ನೀವು ಕಾಣುತ್ತೀರಿ.

وَإِذَا قِيلَ لَهُمْ تَعَالَوْا يَسْتَغْفِرْ لَكُمْ
رَسُولُ اللَّهِ لَوَّوْا رُءُوسَهُمْ وَرَأَيْتَهُمْ
يَصُدُّونَ وَهُم مُّسْتَكْبِرُونَ ⑤

6. ಸಂದೇಶವಾಹಕರೇ, ನೀವು ಅವರಿಗಾಗಿ ಕ್ಷಮಾಯಾಚನೆ ಮಾಡಿ ದರೂ ಮಾಡದಿದ್ದರೂ ಅವರ ಮಟ್ಟಿಗೆ ಒಂದೇ ಆಗಿದೆ. ಅಲ್ಲಾಹನು ಅವರನ್ನು ಎಂದಿಗೂ ಕ್ಷಮಿಸಲಾರನು. ಅಲ್ಲಾಹನು ಕರ್ಮಭ್ರಷ್ಟರಿಗೆ ಖಂಡಿತ ಸನ್ಮಾರ್ಗ ನೀಡುವುದಿಲ್ಲ.

سَوَاءٌ عَلَيْهِمْ أَسْتَغْفَرْتَ لَهُمْ أَمْ لَمْ
تَسْتَغْفِرْ لَهُمْ ۖ لَن يَغْفِرَ اللَّهُ لَهُمْ ۖ
إِنَّ اللَّهَ لَا يَهْدِي الْقَوْمَ الْفَاسِقِينَ ⑥

7. ಸಂದೇಶವಾಹಕರ ಸಂಗಾತಿಗಳಿಗಾಗಿ ಖರ್ಚು ಮಾಡುವುದನ್ನು ನಿಲ್ಲಿಸಿ ಬಿಡಿರಿ; ಇವರು ಚದುರಿ ಹೋಗಲಿ- ಎಂದು ಹೇಳುವವರು ಇವರೇ. ವಸ್ತುತಃ ಭೂಮಿ-ಆಕಾಶಗಳ ಭಂಡಾರಗಳ ಒಡೆತನ ಅಲ್ಲಾಹನ ಕೈಯಲ್ಲಿದೆ. ಆದರೆ ಈ ಕಪಟವಿಶ್ವಾಸಿಗಳು ಗ್ರಹಿಸುವುದಿಲ್ಲ.

هُمُ الَّذِينَ يَقُولُونَ لَا تُنفِقُوا عَلَىٰ
مَنْ عِندَ رَسُولِ اللَّهِ حَتَّىٰ يَنفَضُّوا ۗ
وَلِلَّهِ خَزَائِنُ السَّمَاوَاتِ وَالْأَرْضِ
وَلَٰكِنَّ الْمُنَافِقِينَ لَا يَفْقَهُونَ ⑦

8. ನಾವು ಮದೀನಾಕ್ಕೆ ಹಿಂದಿರುಗಿದಾಗ ಗೌರವಾನ್ವಿತನು ನಿಂದ್ಯನನ್ನು

يَقُولُونَ لَئِن رَّجَعْنَا إِلَى الْمَدِينَةِ

3. ಅರ್ಥಾತ್- ಗೋಡೆಗಳಿಗೆ ಒರಗಿ ಕುಳಿತಂತಹ ಈ ವ್ಯಕ್ತಿಗಳು ಮಾನವರಲ್ಲ, ಮರದ ಕೊರಡುಗಳಾಗಿದ್ದಾರೆ. ಮರದ ಕೊರಡಿಗೆ ಹೋಲಿಸುವ ಮೂಲಕ ಮಾನವೀಯತೆಯ ನಿಜವಾದ ಲಕ್ಷಣವಾಗಿರುವ ನೈತಿಕತೆಯ ಸ್ಫೂರ್ತಿಯಿಂದ ಇವರು ಬರಿದಾಗಿದ್ದಾರೆಂದು ಹೇಳಲಾಗಿದೆ. ಗೋಡೆಗೆ ಒರಗಿಕೊಂಡಿರುವ ಮರದ ಕೊರಡುಗಳಿಗೆ ಹೋಲಿಸುವ ಮೂಲಕ ಅವರು ನಿರರ್ಥಕ ಜೀವಿಗಳು ಎಂದು ಹೇಳಲಾಗಿದೆ. ಏಕೆಂದರೆ ಮರದ ಕೊರಡು ಕೂಡ ಉಪಯುಕ್ತವಾಗಬೇಕಿದ್ದರೆ ಅದು ಯಾವುದಾದರೂ ಛಾವಣಿ, ಬಾಗಿಲು ಅಥವಾ ಪೀಠೋಪಕರಣಗಳಲ್ಲಿ ಬಳಸಲ್ಪಡಬೇಕು. ಗೋಡೆಗೆ ಒರಗಿಸಲಾದ ಮರದ ಕೊರಡಿನಿಂದ ಯಾವ ಪ್ರಯೋಜನವೂ ಇಲ್ಲ.

4. ಅವರನ್ನು ಸತ್ಯವಿಶ್ವಾಸದಿಂದ ಕಾಪಟ್ಯದೆಡೆಗೆ ತಿರುಗಿಸುವವನು ಯಾರು ಎಂದು ಇಲ್ಲಿ ತಿಳಿಸಲಾಗಿಲ್ಲ. ಹೀಗೆ ಸ್ಪಷ್ಟೀಕರಿಸದೇ ಇರುವುದರಿಂದ ಸಹಜವಾಗಿಯೇ ಹೊರಡುವ ಅರ್ಥವೇನೆಂದರೆ ಅವರ ಈ ದುರ್ವರ್ತನೆಗೆ ಕೇವಲ ಒಂದೇ ಪ್ರೇರಕವಿರುವುದಲ್ಲ. ಬದಲಾಗಿ ಅನೇಕ ಪ್ರೇರಕಗಳು ಇದರ ಹಿಂದೆ ಕಾರ್ಯತತ್ಪರವಾಗಿವೆ. ಪಿಶಾಚಿಯಿದೆ, ದುಷ್ಟ ಮಿತ್ರರಿದ್ದಾರೆ, ಸ್ವತಃ ಅವರ ಮನಸ್ಸಿನ ಸ್ವಾರ್ಥಗಳಿವೆ. ಕೆಲವರಿಗೆ ಅವರ ಪತ್ನಿಯರು, ಮತ್ತೆ ಕೆಲವರಿಗೆ ಅವರ ಮಕ್ಕಳು ಮತ್ತು ಇನ್ನು ಕೆಲವರಿಗೆ ತಮ್ಮ ಬಳಗಕ್ಕೆ ಸೇರಿದ ದುಷ್ಟ ವ್ಯಕ್ತಿಗಳೂ ಪ್ರೇರಕಗಳಾಗಿದ್ದಾರೆ. ಕೆಲವರನ್ನು ಅವರ ಈರ್ಷ್ಯೆ, ದ್ವೇಷ ಮತ್ತು ದುರಹಂಕಾರ ಈ ಮಾರ್ಗಕ್ಕೆ ಅಟ್ಟಿ ಬಿಟ್ಟಿದೆ.

ಅಲ್ಲಿಂದ ಹೊರಕ್ಕಟ್ಟಿ ಬಿಡುವನೆಂದು ಇವರು ಹೇಳುತ್ತಾರೆ.[5] ವಾಸ್ತವದಲ್ಲಿ ಗೌರವವಂತೂ ಅಲ್ಲಾಹ್, ಅವನ ಸಂದೇಶವಾಹಕರು ಮತ್ತು ಸತ್ಯವಿಶ್ವಾಸಿಗಳಿಗಾಗಿಯೇ ಇದೆ. ಆದರೆ ಈ ಕಪಟ ವಿಶ್ವಾಸಿಗಳು ತಿಳಿಯುವುದಿಲ್ಲ.

لَيُخْرِجَنَّ الْاَعَزُّ مِنْهَا الْاَذَلَّ ۭ وَلِلّٰهِ الْعِزَّةُ وَلِرَسُوْلِهٖ وَلِلْمُؤْمِنِيْنَ وَلٰكِنَّ الْمُنٰفِقِيْنَ لَا يَعْلَمُوْنَ ۝۸

9. ಸತ್ಯವಿಶ್ವಾಸಿಗಳೇ, ನಿಮ್ಮ ಸಂಪತ್ತು ಮತ್ತು ನಿಮ್ಮ ಸಂತಾನಗಳು ನಿಮ್ಮನ್ನು ಅಲ್ಲಾಹನ ಸ್ಮರಣೆಯಿಂದ ಅಲಕ್ಷ್ಯಗೊಳಿಸದಿರಲಿ. ಹೀಗೆ ಮಾಡುವವರೇ ನಷ್ಟ ಅನುಭವಿಸುವವರು.

يٰۤاَيُّهَا الَّذِيْنَ اٰمَنُوْا لَا تُلْهِكُمْ اَمْوَالُكُمْ وَلَاۤ اَوْلَادُكُمْ عَنْ ذِكْرِ اللّٰهِ ۚ وَمَنْ يَّفْعَلْ ذٰلِكَ فَاُولٰٓئِكَ هُمُ الْخٰسِرُوْنَ ۝۹

10. ನಿಮ್ಮ ಪೈಕಿ ಯಾರದಾದರೂ ಮರಣದ ಸಮಯ ಬಂದಿದ್ದು ಆಗ ಅವನು- "ನನ್ನ ಪ್ರಭೂ ನೀನು ನನಗೆ ಇನ್ನೂ ಸ್ವಲ್ಪ ಹೆಚ್ಚು ಕಾಲಾವಧಿ ನೀಡಿರುವುದಿಲ್ಲವೇಕೆ? ಹಾಗೆ ನೀಡಿದ್ದರೆ ನಾನು ದಾನ-ಧರ್ಮ ಮಾಡುತ್ತಿದ್ದೆ ಮತ್ತು ಸಜ್ಜನರ ಸಾಲಿಗೆ ಸೇರುತ್ತಿದ್ದೆ"- ಎಂದು ಹೇಳುವುದಕ್ಕೆ ಮುಂಚೆ ನಾವು ನಿಮಗೆ ದಯಪಾಲಿಸಿರುವ ಸಂಪತ್ತಿನಿಂದ ಖರ್ಚು ಮಾಡಿರಿ.

وَاَنْفِقُوْا مِنْ مَّا رَزَقْنٰكُمْ مِّنْ قَبْلِ اَنْ يَّاْتِيَ اَحَدَكُمُ الْمَوْتُ فَيَقُوْلَ رَبِّ لَوْلَاۤ اَخَّرْتَنِيْۤ اِلٰۤى اَجَلٍ قَرِيْبٍ ۙ فَاَصَّدَّقَ وَاَكُنْ مِّنَ الصّٰلِحِيْنَ ۝۱۰

11. ವಾಸ್ತವದಲ್ಲಿ ಒಬ್ಬನ ಕರ್ಮಾವಧಿಯು ಪೂರ್ಣಗೊಳ್ಳುವ ಸಮಯ ಬಂದು ಬಿಟ್ಟರೆ ಅಲ್ಲಾಹನು ಯಾರಿಗೂ ಇನ್ನಷ್ಟು ಕಾಲಾವಧಿಯನ್ನು ಕೊಡುವುದಿಲ್ಲ. ನೀವು ಮಾಡುತ್ತಿರುವುದೆಲ್ಲವನ್ನು ಅಲ್ಲಾಹನು ತಿಳಿದವನಾಗಿದ್ದಾನೆ.

وَلَنْ يُّؤَخِّرَ اللّٰهُ نَفْسًا اِذَا جَآءَ اَجَلُهَا ۭ وَاللّٰهُ خَبِيْرٌۢ بِمَا تَعْمَلُوْنَ ۝۱۱

---

5. ಅರ್ಥಾತ್- ಕ್ಷಮೆಯಾಚಿಸಲು ಪ್ರವಾದಿವರ್ಯರ(ಸ) ಬಳಿಗೆ ಬಾರದೆ ಇರುವುದಷ್ಟೇ ಅಲ್ಲ ಆ ಮಾತು ಕೇಳಿ ಅವರು ಅಹಂಭಾವ ಮತ್ತು ದರ್ಪದಿಂದ ತಮ್ಮ ತಲೆಯನ್ನು ಕೊಡವಿಕೊಳ್ಳುತ್ತಾರೆ. ಪ್ರವಾದಿವರ್ಯರ(ಸ) ಬಳಿಗೆ ಬಂದು ಕ್ಷಮೆ ಯಾಚಿಸುವುದು ತಮ್ಮ ಪಾಲಿಗೆ ಅಪಮಾನವೆಂದು ಭಾವಿಸಿ ತಮ್ಮ ಜಾಗದಲ್ಲಿ ಭದ್ರವಾಗಿ ಕುಳಿತಿರುತ್ತಾರೆ. ಇದೆಲ್ಲವೂ ಅವರು ಸತ್ಯವಿಶ್ವಾಸಿಗಳಲ್ಲ ಎಂಬುದರ ಲಕ್ಷಣಗಳಾಗಿವೆ.